ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ತುಮಕೂರು ಜಿಲ್ಲೆಯಲ್ಲಿ ವೈದ್ಯಕೀಯ ಕಾಲೇಜನ್ನು ತೆರೆಯುವ ಬಗ್ಗೆ

ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

418 (412) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿರುವ ಸರ್ಕಾರಿ ವೈದ್ಯಕೀಯ ಕಾಲೇಜುಗಳ ಸಂಖ್ಯೆ ಎಷ್ಟು;

(ಆ) ಈ ಕಾಲೇಜುಗಳನ್ನು ಜಿಲ್ಲಾವಾರು ತೆರೆಯಲಾಗಿದೆಯೇ, ಹಾಗಿದ್ದಲ್ಲಿ, ಜಿಲ್ಲಾವಾರು ಮಾಹಿತಿ ನೀಡುವುದು;

(ಇ) ತುಮಕೂರು ಜಿಲ್ಲೆಯಲ್ಲಿ ಸರ್ಕಾರಿ ಕಾಲೇಜು ಇಲ್ಲದಿರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ಬಂದಿದ್ದಲ್ಲಿ, ತುಮಕೂರು ಜಿಲ್ಲೆಯಲ್ಲಿ ಇದುವರೆವಿಗೂ ಸರ್ಕಾರಿ ವೈದ್ಯಕೀಯ ಕಾಲೇಜನ್ನು ತೆರೆಯಲಾಗಿಲ್ಲದಿರುವುದಕ್ಕೆ ಕಾರಣಗಳೇನು; (ವಿವರ ನೀಡುವುದು)

(ಉ) ಈ ಹಿಂದಿನ ಸರ್ಕಾರಗಳ ಅವಧಿಯಲ್ಲಿ ತುಮಕೂರಿನಲ್ಲಿ ಸರ್ಕಾರಿ ಕಾಲೇಜು ತೆರೆದು ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯನ್ನು ತೆರೆಯಲಾಗುವುದೆಂದು ಸಚಿವ ಸಂಪುಟದಲ್ಲಿ ತೀರ್ಮಾನ ತೆಗೆದುಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಊ) ಬಂದಿದ್ದಲ್ಲಿ, ಸರ್ಕಾರ ಯಾವ ನಿಲುವು ತೆಗೆದುಕೊಂಡಿದೆ; ಸರ್ಕಾರ ಇನ್ನಾದರೂ ಘೋಷಣೆ ಮಾಡಿದಂತೆ ತುಮಕೂರಿಗೆ ಸರ್ಕಾರಿ ವೈದ್ಯಕೀಯ ಕಾಲೇಜು ಮತ್ತು ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಯನ್ನು ತೆರೆಯಲು ಕ್ರಮ ತೆಗೆದುಕೊಳ್ಳುವುದೇ ? (ಸ್ಪಷ್ಟ ಉತ್ತರ ನೀಡುವುದು)